# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : **450**

**ಸದಸ್ಯರ ಹೆಸರು** : **ಶ್ರೀ ಚಿದಾನಂದ ಎಂ. ಗೌಡ (ಪದವೀಧರ ಕ್ಷೇತ್ರದಿಂದ ಚುನಾಯಿತರಾದವರು)**

**ಉತ್ತರಿಸುವ ಸಚಿವರು** : **ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು**

**ಉತ್ತರಿಸಬೇಕಾದ ದಿನಾಂಕ** : **10-12-2020**

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯದ ವಿವಿಧ ನ್ಯಾಯಾಲಯಗಳಲ್ಲಿ 2015ರ ನಂತರ ಹೊಸದಾಗಿ ನೋಂದಣಿಯಾದ ವಕೀಲರ ಸಂಖ್ಯೆ ಎಷ್ಟು; | ಕರ್ನಾಟಕ ರಾಜ್ಯದ ವಿವಿಧ ನ್ಯಾಯಾಲಯಗಳಲ್ಲಿ ವಕೀಲರುಗಳನ್ನು ನೋಂದಣಿ ಮಾಡಿಕೊಳ್ಳಲಾಗುವುದಿಲ್ಲ.<br><br>ಕರ್ನಾಟಕ ರಾಜ್ಯ ವಕೀಲರ ಪರಿಷತ್ತು, ಬೆಂಗಳೂರು ಇಲ್ಲಿ ಕಾನೂನು ಪದವಿ ಪೂರೈಸಿದವರನ್ನು ಹೊಸದಾಗಿ ವಕೀಲರನ್ನಾಗಿ ನೋಂದಣಿ ಮಾಡಿಕೊಳ್ಳಲಾಗುವುದು. 2015ರ ನಂತರದಲ್ಲಿ 15374 ವಕೀಲರುಗಳು ಹೊಸದಾಗಿ ನೋಂದಣಿಯಾಗಿರುತ್ತಾರೆ. |
| ಆ) | ಕಾನೂನು ಪದವಿ ಪೂರೈಸಿ ಹೊಸದಾಗಿ ನೋಂದಣಿ ಮಾಡಿಸಿಕೊಂಡ ವಕೀಲರಿಗೆ ಪ್ರತಿ ತಿಂಗಳು ಶಿಷ್ಯ ವೇತನ (ಸ್ಟೈಫಂಡ್) ಗೌರವಧನ ನೀಡಲಾಗುತ್ತಿದೆಯೇ? (ಮಾಹಿತಿ ನೀಡುವುದು) | ಕಾನೂನು ಪದವಿ ಪೂರೈಸಿ ಹೊಸದಾಗಿ ನೋಂದಣಿ ಮಾಡಿಸಿಕೊಂಡ ವಕೀಲರಿಗೆ ಪ್ರತಿ ತಿಂಗಳು ಶಿಷ್ಯ ವೇತನ (ಸ್ಟೈಫಂಡ್) ಗೌರವಧನ ನೀಡಲಾಗುವುದಿಲ್ಲ.<br><br>ಕಾನೂನು ಇಲಾಖೆ, ಸಮಾಜ ಕಲ್ಯಾಣ ಇಲಾಖೆ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಮತ್ತು ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆಗಳಿಂದ ಪ್ರೋತ್ಸಾಹಧನ (ಸ್ಟೈಫಂಡ್) ನೀಡಲು ಅರ್ಜಿ ಆಹ್ವಾನಿಸಿ, ಅರ್ಜಿ ಸಲ್ಲಿಸಿ, ಆಯ್ಕೆಯಾದ ನವ ಕಾನೂನು ಪದವೀಧರರಿಗೆ ಮಾತ್ರ ಪ್ರೋತ್ಸಾಹಧನ (ಸ್ಟೈಫಂಡ್) ನೀಡಲಾಗುತ್ತಿದೆ.<br><br>ಕಾನೂನು ಇಲಾಖೆಯ ವತಿಯಿಂದ "ನವ ಕಾನೂನು ಪದವೀಧರರಿಗೆ ಪ್ರೋತ್ಸಾಹಧನ" ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಸದರಿ ಯೋಜನೆಯಡಿ ನವ ಕಾನೂನು ಪದವೀಧರರು ನುರಿತ ಹಿರಿಯ ವಕೀಲರ ಜೊತೆ ವೃತ್ತಿ ಜೀವನ ಪ್ರಾರಂಭ ಮಾಡುವ ಮೊದಲು ಪ್ರೋತ್ಸಾಹಧನ ನೀಡುವ ಉದ್ದೇಶದಿಂದ ಯೋಜನೆಯನ್ನು 2006 ರಿಂದ ಜಾರಿಗೆ ತರಲಾಗಿದೆ.<br><br>ಈ ಯೋಜನೆಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಹೊರಡಿಸಿರುವ ಮಾರ್ಗಸೂಚಿ / ಷರತ್ತುಗಳನ್ವಯ ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿನಲ್ಲಿ ಆಯಾ ವರ್ಷಗಳಲ್ಲಿ ನಿಗದಿಪಡಿಸಿದ ಅವಧಿಯೊಳಗೆ ನೋಂದಣಿಯಾದ ವಕೀಲರುಗಳು ಅರ್ಜಿ ಸಲ್ಲಿಸಲು ಅರ್ಹರಾಗಿದ್ದು, ಆಯಾ ಜಿಲ್ಲಾ ಹಂತದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಅಧ್ಯಕ್ಷತೆಯಲ್ಲಿನ ಜಿಲ್ಲಾ ಆಯ್ಕೆ ಸಮಿತಿಯಿಂದ ಆಯ್ಕೆಗೊಂಡ ಅರ್ಹ ಫಲಾನುಭವಿಗಳಿಗೆ ಮಾತ್ರ ಪ್ರತಿ ಮಾಹೆ ರೂ. 2,000/- ಗಳಂತೆ ಒಟ್ಟು 24 ತಿಂಗಳುಗಳಿಗೆ ಪಾವತಿಸಲಾಗುವುದು. ಸದರಿ ಮೊತ್ತವನ್ನು ಆಯಾ ಜಿಲ್ಲೆಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರುಗಳಿಗೆ ಖಜಾನೆ-2 ರ ಮುಖಾಂತರ ಬಿಡುಗಡೆಗೊಳಿಸಲಾಗುತ್ತಿದೆ.<br><br>ಕಾನೂನು ಇಲಾಖೆಯನ್ನು ಹೊರತುಪಡಿಸಿ, ಸಮಾಜ ಕಲ್ಯಾಣ ಇಲಾಖೆ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಮತ್ತು ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆಯ ವತಿಯಿಂದ ಕಾನೂನು ಪದವೀಧರರಿಗೆ ಪ್ರೋತ್ಸಾಹಧನ ನೀಡಲಾಗುತ್ತಿದ್ದು, ವಿವರಗಳು ಕೆಳಕಂಡಂತಿವೆ:- |

| ಕ್ರ. ಸಂ. | ಪ್ರಶ್ನೆ | ಉತ್ತರ | |
|---|---|---|---|
| | | **ಅನುಷ್ಠಾನಗೊಳಿಸುತ್ತಿರುವ ಇಲಾಖೆ** | **ಯೋಜನೆಯ ವಿವರಗಳು** |
| | | 1) ಸಮಾಜ ಕಲ್ಯಾಣ ಇಲಾಖೆ | ಪರಿಶಿಷ್ಟ ಜಾತಿಯ ಪದವೀಧರರು ಕಾನೂನು ಪದವಿ ಪಡೆದ 2 ವರ್ಷದೊಳಗಾಗಿ ಹಿರಿಯ ವಕೀಲರ ಬಳಿ ವೃತ್ತಿ ತರಬೇತಿ ಪಡೆಯಲು ಆನ್‌ಲೈನ್ ಮೂಲಕ ಸಮಾಜ ಕಲ್ಯಾಣ ಇಲಾಖೆಗೆ ಅರ್ಜಿ ಸಲ್ಲಿಸಬಹುದಾಗಿರುತ್ತದೆ. ಆಯ್ಕೆಯಾದ ಅಭ್ಯರ್ಥಿಗಳಿಗೆ 2 ವರ್ಷಗಳ ಕಾಲಾವಧಿಗೆ ಮಾಸಿಕ ರೂ. 10,000/- ಗಳಂತೆ ಶಿಷ್ಯವೇತನ ಪಾವತಿಸಲಾಗುತ್ತಿದೆ.<br><br>ಹೊಸದಾಗಿ ಕಾನೂನು ವೃತ್ತಿ ಕೈಗೆತ್ತಿಕೊಳ್ಳುವ ಕಾನೂನು ಪದವೀಧರರಿಗೆ ಕಛೇರಿ ಸ್ಥಾಪಿಸಿಕೊಳ್ಳಲು, ಕಾನೂನು ಪುಸ್ತಕಗಳನ್ನು ಖರೀದಿಸಲು ಮತ್ತು ಪೀಠೋಪಕರಣ, ಕಂಪ್ಯೂಟರ್ ಇತ್ಯಾದಿ ತೆಗೆದುಕೊಳ್ಳಲು ಒಂದು ಬಾರಿಗೆ ತಾಲ್ಲೂಕು /ಟಿ.ಎಂ.ಸಿ. ಕೇಂದ್ರ ಸ್ಥಾನಗಳಲ್ಲಿ ರೂ. 50,000/- ಮತ್ತು ನಗರ ಸಭೆ/ ಮಹಾನಗರ ಪಾಲಿಕೆಗಳಲ್ಲಿ ರೂ. 1,00,000/- ಅನುದಾನ ನೀಡಲಾಗುತ್ತಿದೆ. |
| | | 2) ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಕಾನೂನು ಪದವಿಯನ್ನು ಪೂರೈಸಿ ಬಾರ್ ಕೌನ್ಸಿಲ್‌ನಲ್ಲಿ ನೋಂದಣಿ ಮಾಡಿಸಿಕೊಂಡು ವಕೀಲಿ ವೃತ್ತಿ ತರಬೇತಿ ಪಡೆಯುವ ಹಿಂದುಳಿದ ವರ್ಗಗಳ ಅರ್ಹ ಅಭ್ಯರ್ಥಿಗಳಿಗೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಪ್ರತಿ ತಿಂಗಳು ರೂ. 4,000/- ಗಳ ಶಿಷ್ಯ ವೇತನ (ಸ್ಟೈಫಂಡ್)ವನ್ನು 4 ವರ್ಷಗಳ ಅವಧಿಗೆ ನೀಡಲಾಗುತ್ತಿದೆ. |
| | | 3) ಅಲ್ಪಸಂಖ್ಯಾತರ ಕಲ್ಯಾಣ ಹಜ್ ಮತ್ತು ವಕ್ಫ್ ಇಲಾಖೆ | ಸರ್ಕಾರದ ಆದೇಶ ಸಂಖ್ಯೆ: ಎಂಡಬ್ಲ್ಯೂಡಿ 268 ಎಂಡಿಎಸ್ 2018, ಬೆಂಗಳೂರು ದಿನಾಂಕ : 18-08-2018ರ ಆದೇಶದಲ್ಲಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖಾ ವತಿಯಿಂದ ಪ್ರತಿ ವರ್ಷ ಬೆಂಗಳೂರು ನಗರ ಜಿಲ್ಲೆ ಗರಿಷ್ಠ 10, ಮಹಾನಗರ ಪಾಲಿಕೆ ಇರುವ ಜಿಲ್ಲೆಗಳಿಗೆ ಗರಿಷ್ಠ 05 ಇನ್ನುಳಿದ ಜಿಲ್ಲೆಗಳಿಗೆ ಗರಿಷ್ಠ 03 ರಂತೆ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ರೂ. 5,000/- ಗಳ ಮಾಸಿಕ ಪ್ರೋತ್ಸಾಹ ಧನವನ್ನು ಜಿಲ್ಲಾವಲಯ ಕಾರ್ಯಕ್ರಮದಡಿ ನೀಡಲಾಗುತ್ತಿದೆ. |

**ಸಂಖ್ಯೆ: ಲಾ-ಎಲ್‌ಎಡಿ/256/2020**

**(ಜೆ.ಸಿ.ಮಾಧುಸ್ವಾಮಿ)**
ಕಾನೂನು, ಸಂಸದೀಯ ವ್ಯವಹಾರಗಳು ಮತ್ತು
ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು